ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಬುಧವಾರ, ದಿನಾಂಕ: 17ನೇ ಜುಲೈ, 2019

ಆಪ್ತ ಸಹಾಯಕರ ವೇತನದ ಕುರಿತು

ಶ್ರೀಪ್ರಾಣೇಶ್.ಎಂ.ಕೆ.(ಸ್ಥಳೀಯಸಂಸ್ಥೆಗಳಕ್ಷೇತ್ರದಿಂದಚುನಾಯಿತರಾದವರು):-

235 (175) ಮಾನ್ಯ ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದ ಜಿಲ್ಲಾಧಿಕಾರಿಗಳ ಕಛೇರಿಯ ಮೂಲಕ ವಿಧಾನ ಸಭೆ ಮತ್ತು ವಿಧಾನ ಪರಿಷತ್ ಸದಸ್ಯರುಗಳ ಆಪ್ತ ಸಹಾಯಕರಾಗಿ

ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುವರ ಸಂಖ್ಯೆ ಎಷ್ಟು; ಯಾವ ಯಾವ ವಿಧಾನ ಸಭಾ ಸದಸ್ಯರುಗಳ, ವಿಧಾನ ಪರಿಷತ್ ಸದಸ್ಯರುಗಳ ಹಾಗೂ ಸಚಿವರುಗಳ ಮತ್ತು ಕ್ಯಾಬಿನೆಟ್ ದರ್ಜೆ ಹೊಂದಿರುವವರ ಬಳಿ ಕಾರ್ಯನಿರ್ವಹಿಸುತ್ತಿರುವವರ ವಿವರ ನೀಡುವುದು ;

(ಆ) ಜಿಲ್ಲಾಧಿಕಾರಿಗಳ ಕಛೇರಿಯ ಮೂಲಕ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುವ ಆಪ್ತ ಸಹಾಯಕರಿಗೆ ಎಷ್ಟು ತಿಂಗಳಿಂದ ವೇತನ ನೀಡಿರುವುದಿಲ್ಲ ಹಾಗೂ ಕಾರಣವೇನು ; (ಜಿಲ್ಲಾವಾರು ವಿವರ ನೀಡುವುದು)

(ಇ) ಜಿಲ್ಲಾಧಿಕಾರಿಗಳ ಕಛೇರಿಯಿಂದ ಯಾವ ಯಾವ ಲೆಕ್ಕ ಶೀರ್ಷಿಕೆಯಡಿ ಗುತ್ತಿಗೆ ಆಧಾರದ ಮೇಲೆ ಕಾರ್ಯ ನಿರ್ವಹಿಸುತ್ತಿರುವ ಆಪ್ತ ಸಹಾಯಕರಿಗೆ ವೇತನ ನೀಡಲು ಸರ್ಕಾರ ಆದೇಶ ಮಾಡಿದೆ ; ಆದೇಶದ ಪ್ರತಿಗಳನ್ನು ನೀಡಿ ಯಾವ ಯಾವ ಜಿಲ್ಲಾಧಿಕಾರಿಗಳ ಕಛೇರಿಗೆ ಇಲ್ಲಿಯವರೆಗೂ ಎಷ್ಟು ಹಣ ಬಿಡುಗಡೆ ಮಾಡಲಾಗಿದೆ ; (ಸಂಪೂರ್ಣ ವಿವರ ನೀಡುವುದು)

(ಈ) ಆಪ್ತ ಸಹಾಯಕರಿಗೆ ಇಲ್ಲಿಯವರೆಗೆ ವೇತನ ನೀಡಿಲ್ಲವೇಕೆ ; ಬೆಂಗಳೂರು ಜಿಲ್ಲಾಧಿಕಾರಿಗಳಿಗೆ ಮಾತ್ರ ಹಣ ಬಿಡುಗಡೆ ಮಾಡಿ ಇತರ ಜಿಲ್ಲಾಧಿಕಾರಿಗಳಿಗೆ ಹಣ ಬಿಡುಗಡೆ ಮಾಡಿಲ್ಲದಿರುವುದೇಕೆ? (ಸಂಪೂರ್ಣ ವಿವರ ನೀಡುವುದು)